ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಗ್ರಾಮೀಣಾಭಿವೃದ್ಧಿ ಇಲಾಖೆಯಿಂದ ನಮ್ಮ ಹೊಲ-ನಮ್ಮ ರಸ್ತೆ ಯೋಜನೆ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

307 (368) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ಜಿಲ್ಲೆಗಳಿಗೆ ಗ್ರಾಮೀಣಾಭಿವೃದ್ಧಿ ಇಲಾಖೆ ವತಿಯಿಂದ ನಮ್ಮ ಹೊಲ-ನಮ್ಮ ರಸ್ತೆ ಯೋಜನೆಯಡಿ 2019-20ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವೆಷ್ಟು ; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ತುಮಕೂರು ಜಿಲ್ಲೆಗೆ ನೀಡಿರುವ ಅನುದಾನದಲ್ಲಿ ಈ ಯೋಜನೆಯಡಿ ಕೈಗೊಂಡಿರುವ ಕಾಮಗಾರಿಗಳು ಯಾವುವು ; (ವಿವರ ಒದಗಿಸುವುದು)

(ಇ) ಬಿಡುಗಡೆ ಮಾಡಿದ ಅನುದಾನವನ್ನು ಸಂಪೂರ್ಣವಾಗಿ ಬಳಸಿಕೊಂಡು ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆಯೇ; ಹಾಗಿದ್ದಲ್ಲಿ, ಪೂರ್ಣಗೊಳಿಸಿದ ಕಾಮಗಾರಿಗಳು ಯಾವುವು ; (ಜಿಲ್ಲೆಯ ತಾಲ್ಲೂಕುವಾರು ಮಾಹಿತಿಯನ್ನು ಒದಗಿಸುವುದು)

(ಈ) ತುಮಕೂರು ಜಿಲ್ಲೆಯಲ್ಲಿ ಈ ಯೋಜನೆಯಡಿ 2019-2020ರ ಮಾರ್ಚ್ ಅಂತ್ಯಕ್ಕೆ ಉಳಿಕೆಯಾಗಿರುವ ಅನುದಾನವೆಷ್ಟು? (ಮಾಹಿತಿ ನೀಡುವುದು)